# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2248
ಸದಸ್ಯರ ಹೆಸರು : ಡಾ. ವೈ.ಎ. ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ)
ಉತ್ತರಿಸುವವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು.
ಉತ್ತರಿಸಬೇಕಾದ ದಿನಾಂಕ : 26-03-2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದ ಅಂಗನವಾಡಿ ಕೇಂದ್ರಗಳಲ್ಲಿ ಅಪೌಷ್ಠಿಕತೆಯಿಂದ ಕೂಡಿರುವ ಮಕ್ಕಳ ಸಂಖ್ಯೆ ಎಷ್ಟು; ಹಾಗೂ ಈ ಮಕ್ಕಳಲ್ಲಿನ ಅಪೌಷ್ಠಿಕತೆ ನಿವಾರಣೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ರಾಜ್ಯದ ಅಂಗನವಾಡಿ ಕೇಂದ್ರಗಳಲ್ಲಿ ತೀವ್ರ ಅಪೌಷ್ಠಿಕತೆಯಿಂದ ಕೂಡಿರುವ ಮಕ್ಕಳ ಸಂಖ್ಯೆ: 8227.<br><br>ಮಕ್ಕಳಲ್ಲಿನ ಅಪೌಷ್ಠಿಕತೆಯನ್ನು ನಿವಾರಿಸಲು ಕೈಗೊಂಡಿರುವ ಕ್ರಮಗಳು ಈ ಕೆಳಕಂಡಂತಿವೆ<br><br>• ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಡಿ ಸಾಮಾನ್ಯ ಮಕ್ಕಳಿಗೆ ಪ್ರತಿದಿನ ರೂ.8/-ರಂತೆ ಘಟಕ ವೆಚ್ಚ ಭರಿಸುತ್ತಿದ್ದು, ತೀವ್ರ ಅಪೌಷ್ಠಿಕತೆಯುಳ್ಳ ಮಕ್ಕಳಿಗೆ ಘಟಕ ವೆಚ್ಚ ರೂ.12/-ರಂತೆ ಪೂರಕ ಪೌಷ್ಠಿಕ ಆಹಾರವನ್ನು ನೀಡಲಾಗುತ್ತಿದೆ.<br>• ಕ್ಷೀರ ಭಾಗ್ಯ ಯೋಜನೆಯಡಿ 6 ತಿಂಗಳನಿಂದ 6 ವರ್ಷದ ಮಕ್ಕಳಿಗೆ ವಾರದಲ್ಲಿ 5 ದಿನ ಕೆನೆಭರಿತ ಹಾಲನ್ನು ನೀಡಲಾಗುತ್ತಿದೆ.<br>• 3 ವರ್ಷದಿಂದ 6 ವರ್ಷದ ಎಲ್ಲಾ ಮಕ್ಕಳಿಗೆ ವಾರದಲ್ಲಿ 2 ದಿನ ಮೊಟ್ಟೆಯನ್ನು ನೀಡಲಾಗುತ್ತಿದೆ.<br>• 6 ತಿಂಗಳಿಂದ 3 ವರ್ಷದ ತೀವ್ರ ಅಪೌಷ್ಠಿಕ ಮಕ್ಕಳಿಗೆ ವಾರದಲ್ಲಿ 3 ದಿನ ಮೊಟ್ಟೆಯನ್ನು ನೀಡಲಾಗುತ್ತಿದೆ.<br>• 3 ರಿಂದ 6 ವರ್ಷದ ತೀವ್ರ ಅಪೌಷ್ಠಿಕ ಮಕ್ಕಳಿಗೆ ವಾರದಲ್ಲಿ 5 ದಿನ ಮೊಟ್ಟೆಯನ್ನು ನೀಡಲಾಗುತ್ತಿದೆ.<br>• ತೀವ್ರ ಅಪೌಷ್ಠಿಕ ಮಕ್ಕಳಿಗೆ ವಾರದಲ್ಲಿ 3 ದಿನ 200 ಎಂ.ಎಲ್.ಹಾಲನ್ನು ನೀಡಲಾಗುತ್ತಿದೆ.<br>• 5 ಹಿಂದುಳಿದ ಜಿಲ್ಲೆಗಳಾದ ಕಲ್ಬುರ್ಗಿ, ಬೀದರ್, ರಾಯಚೂರು, ಕೊಪ್ಪಳ ಮತ್ತು ಯಾದಗಿರಿ ಜಿಲ್ಲೆಗಳ 6 ತಿಂಗಳಿಂದ 3 ವರ್ಷದ ಸಾಧಾರಣ ಅಪೌಷ್ಠಿಕ ಮಕ್ಕಳಿಗೆ ವಾರದಲ್ಲಿ 3 ದಿನ ಮೊಟ್ಟೆ ಹಾಗೂ 3 ವರ್ಷದಿಂದ 6 ವರ್ಷದ ಸಾಧಾರಣ ಅಪೌಷ್ಠಿಕ ಮಕ್ಕಳಿಗೆ ವಾರದಲ್ಲಿ 5 ದಿನ ಮೊಟ್ಟೆಯನ್ನು ನೀಡಲಾಗುತ್ತಿದೆ. 6 ತಿಂಗಳಿಂದ 6 ವರ್ಷದ ಮಕ್ಕಳಿಗೆ 3 ದಿನ 200 ಎಂ.ಎಲ್. ಕೆನೆಭರಿತ ಹಾಲನ್ನು ನೀಡಲಾಗುತ್ತಿದೆ.<br><br>• ವಿವಿಧ ಇಲಾಖೆಗಳ ಸಮನ್ವಯತೆಯೊಂದಿಗೆ ಅಪೌಷ್ಠಿಕತೆ ತಡೆಗಟ್ಟಲು ಕೇಂದ್ರ ಮತ್ತು ರಾಜ್ಯ ಸಹಭಾಗಿತ್ವದಲ್ಲಿ ಪೋಷಣ್ ಅಭಿಯಾನ ಕಾರ್ಯಕ್ರಮವನ್ನು ಜಾರಿಗೊಳಿಸಲಾಗುತ್ತಿದೆ. ಅಪೌಷ್ಠಿಕತೆಗೆ ಸಾಮಾಜಿಕ, ಶೈಕ್ಷಣಿಕ, ಕೌಟುಂಬಿಕ, ಅನುವಂಶಿಕ ಇನ್ನಿತರ ಕಾರಣಗಳು ಸಹ ಇರಬಹುದಾಗಿದ್ದು ಈ ನಿಟ್ಟಿನಲ್ಲಿ ಕುಟುಂಬದ ಎಲ್ಲಾ ಸದಸ್ಯರಿಗೂ / ಸಮುದಾಯದವರಿಗೂ ಸಹ |

| | | |
|---|---|---|
| | | ಅಪೌಷ್ಠಿಕತೆ ಕುರಿತಂತೆ ಮತ್ತು ನಿವಾರಣಾ ಮಾರ್ಗೋಪಾಯಗಳ ಕುರಿತಂತೆ ತಿಳುವಳಿಕೆ ನೀಡಲು ಪೋಷಣ್ ಅಭಿಯಾನ ಯೋಜನೆಯಡಿಯಲ್ಲಿ ಸಮುದಾಯ ಆಧಾರಿತ ಚಟುವಟಿಕೆಗಳನ್ನು / ಜನಾಂದೋಲನ ಕಾರ್ಯಕ್ರಮಗಳನ್ನು ನಡೆಸಲಾಗುತ್ತಿದೆ<br>• ತೀವ್ರ ಅಪೌಷ್ಠಿಕ ಮಕ್ಕಳ ವೈದ್ಯಕೀಯ ವೆಚ್ಚ ಯೋಜನೆಯಡಿ ಔಷಧಿ ಹಾಗೂ ಚಿಕಿತ್ಸಾ ಆಹಾರಕ್ಕಾಗಿ (Therapeutic food) ಪ್ರತಿ ಮಗುವಿಗೆ ವಾರ್ಷಿಕ ರೂ.2000/-ಗಳಂತೆ ವೆಚ್ಚ ಭರಿಸಲಾಗುತ್ತಿದೆ.<br>• ಆರೋಗ್ಯ ಇಲಾಖೆಯ ಸಹಯೋಗ ದೊಂದಿಗೆ ಪೌಷ್ಠಿಕ ಪುನರ್ವಸತಿ ಕೇಂದ್ರ (NRC) ಗಳಲ್ಲಿ ಅಪೌಷ್ಠಿಕ ಮಕ್ಕಳಿಗೆ ಚಿಕಿತ್ಸೆ ನೀಡಲಾಗುತ್ತಿದೆ. |
| ಆ) | ಕರ್ನಾಟಕ ರಾಜ್ಯದಲ್ಲಿ ಬಾಣಂತಿಯರು ಹಾಗೂ ಗರ್ಭಿಣಿಯರಲ್ಲಿ ಪೌಷ್ಠಿಕತೆಯನ್ನು ಹೆಚ್ಚಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಮಾಹಿತಿ ನೀಡುವುದು) | ರಾಜ್ಯದಲ್ಲಿ ಬಾಣಂತಿಯರು ಹಾಗೂ ಗರ್ಭಿಣಿಯರಲ್ಲಿ ಪೌಷ್ಠಿಕತೆಯನ್ನು ಹೆಚ್ಚಿಸಲು 2ನೇ ಅಕ್ಟೋಬರ್, 2017 ರಿಂದ ಮಾತೃಪೂರ್ಣ ಯೋಜನೆಯನ್ನು ಜಾರಿಗೊಳಿಸಲಾಗಿದೆ. ಈ ಯೋಜನೆಯಡಿ ಗರ್ಭಿಣಿ, ಬಾಣಂತಿಯರಿಗೆ ಮಧ್ಯಾಹ್ನದ ಬಿಸಿಯೂಟ ನೀಡಲಾಗುತ್ತಿದೆ.<br><br>ಈ ಊಟದಲ್ಲಿ ಅನ್ನ, ಸಾಂಬಾರು, ಪಲ್ಯ, 200 ಎಂ.ಎಲ್. ಹಾಲು, ಮೊಟ್ಟೆ ಹಾಗೂ ಶೇಂಗಾ ಚಿಕ್ಕಿಯನ್ನು ನೀಡಲಾಗುತ್ತಿದೆ. ಪ್ರಸ್ತುತ ಕೋವಿಡ್ ಹಿನ್ನೆಲೆಯಲ್ಲಿ ಅಂಗನವಾಡಿ ಕೇಂದ್ರಗಳಲ್ಲಿ ಗರ್ಭಿಣಿ ಮತ್ತು ಬಾಣಂತಿಯರಿಗೆ ಆಹಾರವನ್ನು ತಯಾರಿಸಿ ನೀಡುತ್ತಿರುವುದಿಲ್ಲ. ಬದಲಾಗಿ, ಕಚ್ಚಾ ಆಹಾರ ಧಾನ್ಯಗಳನ್ನು ಅವರ ಮನೆಗೆ ವಿತರಿಸಲಾಗುತ್ತಿದೆ.<br><br>ಗರ್ಭಿಣಿ ಮತ್ತು ಬಾಣಂತಿಯರಿಗೆ ಪೂರಕ ಪೌಷ್ಠಿಕ ಅಹಾರಗಳಾದ ಹಣ್ಣು, ತರಕಾರಿ ಇನ್ನಿತರ ಪೌಷ್ಠಿಕ ಆಹಾರ ಸೇವನೆಯ ಉದ್ದೇಶಕ್ಕಾಗಿ ಪ್ರಧಾನ ಮಂತ್ರಿ ಮಾತೃವಂದನಾ ಯೋಜನೆಯಡಿಯಲ್ಲಿ ರೂ.5000/-ಗಳನ್ನು ನೀಡುವ ಯೋಜನೆ ಜಾರಿಗೊಳಿಸಲಾಗಿದೆ. |

ಸಂಖ್ಯೆ: ಮಮಇ 138 ಐಸಿಡಿ 2021

(ಆಚಾರ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂವಿಜ್ಞಾನ, ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು
ಹಿರಿಯ ನಾಗರಿಕರ ಸಬಲೀಕರಣ ಸಚಿವರು